

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 04-03-2021 ಪ್ರಶ್ನೆ ಸಂಖ್ಯೆ : 556 (601)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 04-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಐ. ಎಂ. ಎ. ಹಗರಣದಲ್ಲಿ ಭಾಗಿಯಾದ ಐ. ಪಿ. ಎಸ್. ಅಧಿಕಾರಿಗಳ ಕುರಿತು

(ಅ) ಐ. ಎಂ. ಎ. ಹಗರಣದಲ್ಲಿ ಐ. ಪಿ. ಎಸ್. ಅಧಿಕಾರಿಗಳು 20 ಕೋಟಿಗೂ ಅಧಿಕ ಹಣ ಪಡೆದಿರುವುದಾಗಿ ಸಿ.ಬಿ.ಐ. ಚಾರ್ಜುಶೀಟ್‌ನಲ್ಲಿ ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸದರಿ ಆರೋಪದ ಬಗ್ಗೆ ಲೋಕಾಯುಕ್ತ, ಎ.ಸಿ.ಬಿ. ,ಇಡಿ, ಇನ್‌ಕಮ್ ಟ್ಯಾಕ್ಸ್ ವಿಭಾಗಗಳಿಗೆ ಮಾಹಿತಿ ನೀಡಲಾಗಿದೆಯೇ; ಇಲ್ಲವಾದಲ್ಲಿ ಕಾರಣವೇನು;

(ಇ) ಕೇವಲ ಭ್ರಷ್ಟಾಚಾರದ ಆರೋಪದ ಕಾರಣಕ್ಕಾಗಿ ರಾಜಕಾರಣಿಗಳು ರಾಜೀನಾಮೆ ನೀಡಿ ಜೈಲಿಗೆ ಹೋಗಿರುವಾಗ ಐ. ಪಿ. ಎಸ್. ಅಧಿಕಾರಿಗಳನ್ನು ಬಂಧಿಸದಿರಲು ಕಾರಣವೇನು;

(ಈ) ಐ. ಎಂ. ಎ. ಹಗರಣಕ್ಕೆ ಸಂಬಂಧಿಸಿದಂತೆ 1000 ಪುಟಗಳ ಚಾರ್ಜ್‌ಶೀಟ್ ದಾಖಲಾದರೂ ಐ. ಪಿ. ಎಸ್. ಅಧಿಕಾರಿಗಳಿಗೆ ಯಾರ ಒತ್ತಡದಲ್ಲಿ ಪೋಸ್ಟಿಂಗ್ ನೀಡಲಾಗಿದೆ; ಐ.ಪಿ.ಎಸ್. ಅಧಿಕಾರಿಗಳ ಮೇಲೆ ಭ್ರಷ್ಟಾಚಾರದ ಆರೋಪ ಇರುವ ಕುರಿತು ಕೇಂದ್ರ ಸರ್ಕಾರಕ್ಕೆ ಅಮಾನತ್ತಿಗೆ ಅನುಮತಿ ಕೋರಿ ಯಾವಾಗ ಪತ್ರ ಬರೆಯಲಾಗಿದೆಯೇ; ಇಲ್ಲವಾದಲ್ಲಿ ಕಾರಣವೇನು;

(ಉ) ನ್ಯಾಯಾಲಯಕ್ಕೆ ಚಾರ್ಜುಶೀಟ್ ದಾಖಲಾದ ಸರ್ಕಾರಿ ನೌಕರರ ಮೇಲೆ ಸಾಮಾನ್ಯವಾಗಿ ಕೈಗೊಳ್ಳುವ ಕ್ರಮಗಳೇನು; ಹಾಗೂ ಈ ಕುರಿತು ಇರುವ ನಿಯಮಗಳೇನು?